# 18

# ಜಗಳಗಂಟಿ

ಮತ್ತು

# ಇತರ ಕಥೆಗಳು.

ಲೇಖಕರು:

ವೈದ್ಯಗುರು ಎಂ. ಆರ್. ಭಟ್,

ಮಂಗಳೂರು.

**1955.**

ಒಂದಾಣೆ 

ಮಾಲೆ

# 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವ ಕೆಲವು ವಿಷಯಗಳು

ಸಣ್ಣ ಕತೆಗಳು—ಪ್ರಹಸನಗಳು—ನೀಳ್ಗತೆಗಳು—ಏಕಾಂಕ ನಾಟಕಗಳು—ವ್ಯಕ್ತಿಚಿತ್ರ—ದೇಶ-ವಿದೇಶ ಚರಿತ್ರೆ—ವಿಜ್ಞಾನ—ಚಿಕ್ಕ ನಿಘಂಟುಗಳು—ಶಿಲ್ಪ—ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ—ಲಲಿತಕಲೆ—ಸೃಷ್ಟಿಯ ವೈಚಿತ್ರ್ಯಗಳು—ಗೃಹವೈದ್ಯ—ಶೈಕ್ಷಣಿಕ ವಿಚಾರಗಳು—ಗೃಹಿಣಿಯರಿಗೆ ಉಪಯುಕ್ತ ಸಲಹೆಗಳು—ಕ್ಷೇತ್ರಗಳ ವಿವರ—ಸುಭಾಷಿತ—ವಾಙ್ಮಯ ವಿಚಾರ—ಪ್ರಯಾಣ ಕತೆಗಳು—ಸತ್ಯಕಥಾನಕಗಳು, ಇತ್ಯಾದಿ.

ಡಾ| ವಿ. ಆರ್. ಭಟ್, ಟಿ. ಡಿ. ಡಿ, ಶ್ರೀ| ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್, ವೈದ್ಯಗುರು ಎಂ. ಆರ್. ಭಟ್, ದಿ| ಎಮ್. ಎಸ್. ಕಾಮತ್, ಶ್ರೀ| ಪಿ. ಎಸ್. ವೆಂಕಟಕೃಷ್ಣ ರಾವ್, ಎಂ.ಎ., ಬಿ.ಟಿ., ಶ್ರೀ| ಎಮ್. ಸುಬ್ರಾಯನ್, ವಿದ್ವಾನ್, ಶ್ರೀ| ಕುಡ್ಪಿ ವಾಸುದೇವ ಶೆಣೈ, ಶ್ರೀ| ಎಲ್. ಎಸ್. ನಾಯಕ, ಡಾ| ಎಸ್. ಪಿ. ಭಟ್--ಮೊದಲಾದವರ ಲೇಖನಗಳು 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವುವು.

ಕೆಲವು ಪ್ರಕಟಣೆಗಳಲ್ಲಿ 32, 36, ಅಥವಾ ಹೆಚ್ಚು ಪುಟಗಳಿರುವುವು. ಆದರೆ, ಯಾವ ಪ್ರಕಟಣೆಯೂ ಹದಿನಾರು ಪುಟಗಳಿಗಿಂತ ಕಡಿಮೆಯಿಲ್ಲ.

ಈ ವರೆಗೆ ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಕಗಳು: ೧. ಕೆಪ್ಪಟೆರಾಯ, (ವಿನೋದ ಕಥೆ) ೨) ನಾರೀಶ್ವರರು (ಪ್ರಹಸನ) ೩) ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು (ನೀತಿ ಕಥೆಗಳು) ೪) ಸದ್ರಿ ಸುಬ್ಬ (ಪ್ರಹಸನ); ೫. ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ನೀತಿಕಥೆಗಳು); (4) ಚುನಾವಣೆ ಅರ್ಥಾತ್ ಬನಾವಣೆ (ಪ್ರಹಸನ); ೭. ಬೀಡಿ ಸೇದಬೇಡಿ ಮತ್ತು ಆ ಮಗು (ವಿನೋದ ಕಥೆಗಳು); ೮. ಅರ್ಥಕೋಶ; ೯. ಲಂಚಕ್ಕೆ ಸಂಚಕಾರ ೧೦. ಟಿಶ್ಯೂ ಔಷಧಿಗಳ ಕೈಪಿಡಿ; ೧೧. ಶ್ರೀಕ್ಷೇತ್ರ ಧರ್ಮಸ್ಥಳ; ೧೨. ಜೀವದ ಮೌಲ್ಯ; ೧೩. ಸತ್ತವನ ಸೇಡು ಮತ್ತು ಇತರ ಕಥೆಗಳು. ೧೪. "ವೆಂಕಪ್ಪನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು. ೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ). ೧೬. ವೇಣೂರಿನ ಗತವೈಭವ. ೧೭. ಒಗಟುಗಳು. ೧೮. ಜಗಳಗಂಟಿ ಮತ್ತು ಇತರ ಕಥೆಗಳು.

**ವಾರಕ್ಕೊಂದು ಹೊಸ ಪುಸ್ತಕ! ಪ್ರತಿ ಶನಿವಾರ ಪ್ರಕಟಣೆ!**

## ಒಂದಾಣೆ ಮಾಲೆ,

**ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.**

# ಜಗಳಗಂಟಿ
## ಮತ್ತು
## ಇತರ ಕಥೆಗಳು

▪▪▪▪▪▪▪▪▪

### ೧. ಜಗಳಗಂಟಿ

ಆ ಊರಿನ ಜನರೊಳಗೆ ಬಹು ಐಕ್ಯ ಹಾಗು ಆತ್ಮೀಯತಾ ಭಾವನೆಯು ಇತ್ತು, ಎಲ್ಲರೂ ಪರಸ್ಪರ ಪ್ರೇಮದಿಂದಿದ್ದು, ಸಂತೋಷದಿಂದ ಕಾಲ ಕಳೆಯುತಿದ್ದರು.

ಒಂದು ದಿನ ಆ ಊರಿಗೆ, ಓರ್ವ ವಯೋವೃದ್ಧನು ಬಂದನು. ಬಂದವನೇ, ಆ ಊರಿನ ಮಹಿಳೆಯರು ನೀರು ತುಂಬಿಸಿಕೊಳ್ಳುತಿದ್ದ ಸ್ಥಳಕ್ಕೆ ಮುಂದರಿದು, ಅಲ್ಲಿ ತಡೆದುಕೊಂಡನು. ಅವನನ್ನು ನೋಡಿದೊಡನೆ ಆ ಸ್ತ್ರೀಯರಿಗೆ ಒಂದು ವಿಧದ ಕರುಣೆಯುಂಟಾಯಿತು.

ಅತ್ಯಂತ ವೃದ್ಧನಾದ ಕಾರಣ, ಆ ದಾರಿಯಾಗಿ ಹೋಗುತಿದ್ದ ಒಬ್ಬೊಬ್ಬರೇ ಅವನಕಡೆ ದೃಷ್ಟಿ ಹೊರಳಿಸಿ, ಅಲ್ಲಿ ತುಸು ನಿಲ್ಲುತಿದ್ದರು. ಸ್ವಲ್ಪ ಸಮಯದಲ್ಲಿಯೇ, ಅವನನ್ನು ನೋಡುವ ಸಲುವಾಗಿ ಅಲ್ಲಿ ಜನರು ಕಿಕ್ಕಿರಿದು ನೆರೆದು ಬಂದರು.

"ನಿನ್ನ ಹೆಸರೇನು?"—ಒಬ್ಬನು ಪ್ರಶ್ನಿಸಿದನು.

"ನನ್ನ ಹೆಸರು ಜಗಳಗಂಟಿ"—ಎಂದನು ಮುದುಕ.

"ಜಗಳಗಂಟಿ?" ಹ್ಹ! ಹೀಗೂ ಒಂದು ಹೆಸರು ಇದೆಯೇ? ಒಳ್ಳೇ ತಮಾಷೆ! ಜನರು ಕುತೂಹಲಗೊಂಡರು. ಅವನೊಡನೆ, ಆ ಹೆಸರು ಹೇಗೆ ಬಂತೆಂದು ಪ್ರಶ್ನಿಸಿದರು.

ಮುದುಕನು ಹೀಗಂದನು: "ನಾನು ಎಲ್ಲಿಗೆ ಹೋದರೂ, ಇಚ್ಛಿಸಿದಾಗ ಜಗಳವನ್ನು ಸೃಜಿಸಬಲ್ಲೆನು!"

ಅವನ ಮಾತನ್ನು ಕೇಳಿದೊಡನೆ ಅಲ್ಲಿಯ ಜನರು, ಆ "ತಮಾಷೆ" ಯನ್ನು ಪ್ರದರ್ಶಿಸಬೇಕೆಂದು ಅವನೊಡನೆ ಆಗ್ರಹದಿಂದ ಕೇಳಿಕೊಂಡರು.

ಜನರ ಗುಂಪಿನಲ್ಲಿ, ವಿವೇಕಿ ಪುರುಷನೊಬ್ಬನು, ಹಾಗೆ ಮಾಡಿಸಬೇಡಿರೆಂದು ತನ್ನವರೊಡನೆ ಕೇಳಿಕೊಂಡನು. ಆದರೆ, ಕುತೂಹಲಿ ಜನರು, ತಮ್ಮ ಉತ್ಸಾಹ-ಕುತೂಹಲಗಳನ್ನು ತಡೆಯಲಾರದವರಾಗಿದ್ದರು. ಒಂದು ಜಗಳವನ್ನು ಮಾಡಿಸಿ ನೋಡಲೇಬೇಕೆಂದು ಒತ್ತಾಯಪಡಿಸಿದರು.

ಆಗ, ಜಗಳಗಂಟನು ಹೀಗಂದನು: "ನನಗೆ ಹಸಿವೆಯಾಗಿದೆ; ಮುಂಚಿತವಾಗಿ ನನಗೆ ತಿಂಡಿಯನ್ನು ಕೊಡಿರಿ."

ಕೂಡಲೇ, ಊರಿನ ಜನರು ಅವನಿಗೆ ರೊಟ್ಟಿ ಮತ್ತು ಬೆಲ್ಲ ಕೊಟ್ಟರು:

ಅವನು ಹೊಟ್ಟೆ ತುಂಬ ರೊಟ್ಟಿ ತಿಂದನು. ಬೆಲ್ಲವನ್ನು ನೆಲದ ಮೇಲೆ ಚೆಲ್ಲಿ ಬಿಟ್ಟನು.

ಸ್ವಲ್ಪ ಸಮಯದಲ್ಲೆ ಇರುವೆಗಳು ಬಂದು, ನೆಲದ ಮೇಲೆ ಬಿದ್ದಿದ್ದ ಆ ಬೆಲ್ಲಕ್ಕೆ ಮುತ್ತಿಕೊಂಡುವು.

ಇರುವೆಗಳನ್ನು ನೋಡಿ, ಗೋಡೆಯ ಮೇಲಿದ್ದ ಒಂದು ಹಲ್ಲಿಯು, ಅವುಗಳನ್ನು ತಿನ್ನಲು ಓಡಿ ಬಂತು.

ಹಲ್ಲಿಯನ್ನು ನೋಡಿ, ಬಳಿಯಲ್ಲೆ ಇದ್ದ ಮಿಠಾಯಿ ಅಂಗಡಿಯ ಬೆಕ್ಕು ನೆಗೆದು ಬಂದು, ಆ ಹಲ್ಲಿಯ ಮೇಲೆ ಬಿತ್ತು.

ಬೆಕ್ಕು ಪುನಃ ಹೊರಟು ಹೋಗುವಾಗ, ಕಮ್ಮಾರನ ನಾಯಿಯು ಬೆಕ್ಕಿನ ಮೇಲೆ ಹಾರಿತು. ಬೆಕ್ಕು ನಾಯಿಯ ಮೂಗನ್ನು ಪರಚಿತು. ನಾಯಿಗೆ ನೋವಾಗಿ, ಅದು ಕೂಗುತ್ತ ತನ್ನ ಯಜಮಾನನ ಬಳಿಗೆ ಹೋಗಲು, ಕಮ್ಮಾರನ ಮಗನು ಕೋಪದಿಂದ ಬೆಕ್ಕನ್ನು ಹೊಡೆಯಲಾರಂಭಿಸಿದನು.

ಬೆಕ್ಕನ್ನು ಹೊಡೆವುದನ್ನು ನೋಡಿ, ಅದರ ಯಜಮಾನಿ (ಮಿಠಾಯಿ ಅಂಗಡಿಯವನ ಹೆಂಡತಿ) ಯು, ಓಡಿಬಂದು ಆ ಕಮ್ಮಾರನ ಹುಡುಗನನ್ನು ಹಿಡಿದು ಹೊಡೆದಳು.

ಕಮ್ಮಾರನ ಹುಡುಗನ ತಾಯಿಯು, ತನ್ನ ಮಗನನ್ನು ಮಿಠಾಯಿಯವನ ಹೆಂಡತಿ ಹೊಡೆಯುತ್ತಿರುವುದನ್ನು ಕಂಡೊಡನೆ ತಾನೂ ರಣಕಳಕ್ಕೆ ಹಾರಿ, ಮಿಠಾಯಿಯವನ ಹೆಂಡತಿಗೆ ಹೊಡೆದಳು.

ತನ್ನ ಪತ್ನಿಯು ಪೆಟ್ಟು ತಿನ್ನುವುದನ್ನು ನೋಡಿ ಕುಪಿತನಾಗಿ, ಮಿಠಾಯಿಯವನು ಆ ಕಮ್ಮಾರ ಸ್ತ್ರೀಗೆ ಹೊಡೆದನು.

ಸ್ತ್ರೀಯರ ಜಗಳದಲ್ಲಿ ಪುರುಷನು ಬಂದು ಪ್ರವೇಶಿಸಿದುದು ಕಮ್ಮಾರನಿಗೆ ಸರಿದೋರಲಿಲ್ಲ. ಅವನು ಮಿಠಾಯಿಯವನ ಮೇಲೆ ಹಾರಿ ಬಿದ್ದು ಹೊಡೆಯಲಾರಂಭಿಸಿದನು.

ಮಿಠಾಯಿಯವನ ಜಾತಿಯವರೊಂದು ಕಡೆ—ಕಮ್ಮಾರನ ಜಾತಿಯವರೊಂದು ಕಡೆ—ಹೀಗೆ ಪಂಗಡಗಳಾಗಿ ನಿಂತರು; ಕಾದಾಡಿದರು.

ಘೋರ ಯುದ್ಧವೇ ನಡೆಯಿತು!

o o o o o o o o

ಸಾಯಂಕಾಲ ಜಗಳವು ಮುಗಿದು ಶಾಂತಿ ಸ್ಥಾಪನೆಯಾದಾಗ, ಜಗಳವು ಹೇಗೆ ಪ್ರಾರಂಭವಾಯಿತು ಎಂದು ಎಲ್ಲರೂ, ಮೂಲ ಶೋಧನೆಗೆ ತೊಡಗಿದರು. ಆಗ, ತಿಳುವಳಿಕೆಯ ವಿವೇಕಿ ಪುರುಷನು ಕೇಳಿದನು: "ಜಗಳಗಂಟನು ಎಲ್ಲಿ?"

ಜನರು ನೋಡಿದರು,—ಜಗಳಗಂಟನು ಮಾಯವಾಗಿದ್ದನು. ಆಗ ಜನರಿಗೆ ತಿಳಿಯಿತು—ಈ ಜಗಳವು ಜಗಳಗಂಟನಿಂದಲೇ ಆಯಿತೆಂದು!

ಅನಂತರ ಆ ಊರಿನಲ್ಲಿ ಇನ್ನೊಮ್ಮೆ ಶಾಂತಿ ನೆಲೆಸಿತು.

--------

## ೨. ಅಭಿಮಾನೀ

ಎಂಟು ವರ್ಷಗಳಲ್ಲಿ ನಾನು ಎಷ್ಟೋ ಬದಲಾಗಿದ್ದೆನು. ಆದರೆ, ಇಂದೋರು ಸ್ವಲ್ಪವಾದರೂ ಬದಲಾಗಿರಲಿಲ್ಲ. ಅದೇ ಕೆಸರು, ಅದೇ ಮಾರ್ಗ, ಅದೇ ಮಾರ್ಗದ ಮಧ್ಯೆ ಮಣ್ಣಿನ ರಾಶಿ, ಕಾಲ್ದಾರಿಯ ಮೇಲೆ ಮಲಗುವ ಅದೇ ಭಿಕ್ಷುಕ! ನಾವು ಹಿಂದೆ ವಾಸಿಸುವಲ್ಲಿಯೇ ನನ್ನ ಮನೆಯವರು ಇಂದೂ ವಾಸಿಸುತಿದ್ದರು. ಹೊಟ್ಟೆಗೋಸುಗ ನಾನು ಮುಂಬಯಿಗೆ ಹೋಗಿ ನೌಕರಿಮಾಡಬೇಕಾಯಿತು. ನಾನು ಅಲ್ಲಿ ಒಬ್ಬ ಪ್ರೊಫೆಸರನಾಗಿದ್ದೆನು. ಆಗತಾನೇ ರೈಲ್‌ಗಾಡಿಗೆ ಬಂದು ಇಳಿದಿದ್ದೆನು. ನಾಲ್ವರು ಗಾಡಿಯವರು ಮತ್ತು ಮೂವರು ಕೂಲಿಯವರು ಒಮ್ಮೆಗೇನೇ ಬಂದು ನನ್ನ ಸಾಮಾನುಗಳನ್ನು ಎಳೆಯುತಿದ್ದರು. ನಾನು ಗಾಡಿಯವರನ್ನೂ, ಮೂವರು ಕೂಲಿಯವರನ್ನೂ ಕಳುಹಿಸಿಕೊಟ್ಟು, ನಾಲ್ಕನೆಯವನೊಬ್ಬ ನನ್ನು ಕರೆದು, ಮೂರಾಣೆ ಕೂಲಿ ನಿಶ್ಚಯಿಸಿ, ಅವನೊಡನೆ ಸಾಮಾನುಗಳನ್ನು ಕೊಟ್ಟೆನು.

ರಾತ್ರಿ ಎರಡು ಗಂಟೆಯಾಗಿತ್ತು. ಮಂದಮಂದವಾಗಿ ಮಳೆ ಬರುತಿತ್ತು. ಆದರೆ, ಕೆಸರನ್ನು ನೋಡಿದರೆ, ಎಲ್ಲ ಮಳೆ ಅಲ್ಲಿಯೇ ಬಿದ್ದಿತ್ತೆಂದು ಭಾಸವಾಗುತಿತ್ತು. ನಾನು ಕೂಲಿಯವನ ಹಿಂದೆ ಹಿಂದೆ ಹೋಗುತಿದ್ದೆನು. ಫಕ್ಕನೆ ಅವನ ಕಾಲುಜಾರಿತು, ಮತ್ತು ಅವನ ಕೈಯಿಂದ ನನ್ನ ಚರ್ಮದ ಪೆಟ್ಟಿಗೆಯೂ ಜಾರಿ ಕೆಳಗೆ ಬಿತ್ತು. ನನಗೆ ಕೋಪವುಂಟಾಯಿತು. "ಕೆಳಗೆ ಹಾಕಿದಿಯೇನು? ನಿನ್ನಿಂದ ಹೊರಲಾಗದಿದ್ದರೆ ಇತ್ತ ಕೊಡು! ತ್ರಾಣ ವಿಲ್ಲವೇ?" ಎಂದು, ನನ್ನ ಹೊಟ್ಟೆಯುರಿಯ ಎರಡು ಬಿಸಿಮಾತುಗಳು ನನ್ನ ಬಾಯಿಂದ ಹೊರಬಿದ್ದುವು.

ಕೂಲಿಯು ಮೌನದಿಂದ ಆ ಪೆಟ್ಟಿಗೆಯೆತ್ತಿ, ಮುಂದರಿದನು.

ಸ್ಟೇಷನಿನಿಂದ ಸಾಕಷ್ಟು ದೂರ ಬಂದಿದ್ದೆವು; ಇನ್ನೂ ದೂರ ಹೋಗಬೇಕಾಗಿತ್ತು. ಮಳೆಯೊಂದಿಗೆ ಚಳಿಯೂ ಧಾರಾಳ ಇತ್ತು. ಆ ಕೂಲಿಯವನಲ್ಲೂ ಚಳಿಯ ಪರಿಣಾಮವಾಗಿತ್ತು. ನೆಗಡಿಯಾಗದಂತೆ ನಾನು ಸಾಕಷ್ಟು ಅಂಗಿಗಳನ್ನು ತೊಟ್ಟುಕೊಂಡಿದ್ದೆನು; ಅಷ್ಟು ಅಂಗಿಗಳ ಭದ್ರತೆ ಆ ಕೂಲಿಯವನಿಗಿರಲಿಲ್ಲ.

ಒಂದು ಕಟ್ಟಡದ ಬಳಿ ನಾನು, ಮಳೆ ಕಡಿಮೆಯಾಗಲೆಂದು ಸ್ವಲ್ಪ ನಿಂತೆ. ಆ ಮೇಲೆ ಪುನಃ ಮುಂದುವರಿಯುತ್ತ, ಆ ಕೂಲಿಯವನೊಡನೆ, "ನೀನು ರಾಮಚಂದ್ರಜೀಯವರನ್ನು ಬಲ್ಲೆಯಾ? ನಾನು ಅವರಲ್ಲಿಗೇ ಹೋಗಬೇಕಾಗಿದೆ" ಎಂದೆ.

"ನೀವು ರಾಮಚಂದ್ರಜೀಯವರಿಗೆ ಏನಾಗಬೇಕು?"—ಅವನು ಮೊದಲನೇ ಬಾರಿ ನನ್ನೊಡನೆ ಮಾತಾಡಿದನು.

"ಅವರು ನನ್ನ ತಂದೆಯವರು"—ನಾನಂದೆ.

"ನಿಮ್ಮ ಹೆಸರು ಜ್ಞಾನಚಂದ್ರ?"—ಅವನು ಪ್ರಶ್ನಿಸಿದನು.

"ನಿನಗೆ ಅವರೆಲ್ಲರ ಪರಿಚಯ ತುಂಬಾ ಇದೆ!" ನಾನಂದೆ.

"ಬಹು ವರ್ಷಗಳಿಂದ ಅವರು ಇಲ್ಲಿರುತ್ತಾರೆ. ಮತ್ತು ನಾನು ಕೂಡ" ಎಂದು ಅವನು ಸಂಕೋಚದಿಂದ ಹೇಳಿದನು.

ಆಗ, ನಾನು ಅವನ ಕಡೆಗೆ ಲಕ್ಷ್ಯವಿಟ್ಟು ನೋಡಿದೆ. ಅವನ ಸ್ವರ, ಮಾತಿನ ರೀತಿ—ನನಗೆ ಪರಿಚಯವಿದ್ದಂತೆ ಕಂಡಿತು. "ನಾನು ನಿನ್ನನ್ನು ಹಿಂದೆ ಎಲ್ಲೋ ನೋಡಿದ್ದೇನೆ—ಎಲ್ಲೆಂದು ನೆನಪಿಗೆ ಬರುವುದಿಲ್ಲ"—ಎಂದೆ.

ಅವನು ಸುಮ್ಮನಿದ್ದನು.

ನಾನು ಹೇಳಿದನೇ ಅವನು ನಮ್ಮ ಮನೆಯ ಮುಂದೆ ಹೋಗಿ ನಿಂತನು. ನಾನು, "ಬಾಪೂಜೀ" ಎಂದು ಕೂಗಿದೆ.

"ಹಗಲಲ್ಲಿ ಬರಲಾಗಲಿಲ್ಲವೇ? ರಾತ್ರಿ ಸಮಯ ಏಕೆ ಬಂದೆ?" ಎಂದು ತಂದೆಯವರು ಬಂದು ಬಾಗಿಲು ತೆರೆದವರೇ, ಪ್ರಶ್ನಿಸಿದರು.

ನಾನು, ಎಂಟಾಣೆ ಪಾವಲಿ ತೆಗೆದು ಕೂಲಿಯವನ ಕೈಗಿತ್ತು, "ಉಳಿದ ಐದಾಣೆ ಕೊಡು" ಎಂದು ಹೇಳಿದೆ.

"ಚಿಲ್ಲರೆಯಿಲ್ಲ. ಮೂರಾಣೆ ಇದ್ದರೆ ಕೊಡಿರಿ" ಎಂದನು ಕೂಲಿಯವನು. ಅವನೊಡನೆ ಚಿಲ್ಲರೆಯಿಲ್ಲವೆಂದು ತಿಳಿದು, ಅವನಿಗೆ ಜಗಲಿ ಮೇಲೆ ಬರಲು ಹೇಳಿದೆ.

ಆದರೆ, ಕೂಲಿಯವನು ಮೇಲೆ ಬರಲಿಲ್ಲ. "ಬೇಡ. ನಾಳೆ ಬಂದು ತೆಗೆದುಕೊಂಡು ಹೋಗುವೆ" ಎಂದುತ್ತರವಿತ್ತನು.

"ನಾಳೆ ಬೇಡ—ಈಗಲೇ ತೆಗೆದುಕೊಂಡು ಹೋಗು" ಎಂದು ದೃಢ ಸ್ವರದಲ್ಲಿ ಅವನಿಗೆ ಹೇಳಿದೆ, ಆಗಲೇ, ಅವನ ಮುಖದ ಮೇಲೆ, ತಂದೆಯವರು ತಂದಿದ್ದ ಲಾಂದ್ರದ ಬೆಳಕು ಬಿತ್ತು. ತಟ್ಟನೆ ಒಂದು ಸಜೀವ ಚಿತ್ರವು ನನ್ನ ಸ್ಮೃತಿಗೆ ಬಂತು. ಮೈ ಝುಮ್ಮೆನಿಸಿತು!

"ಮಾಸ್ಟರ್—ಮಾಸ್ಟರ್‌ಜಿ!"—ನಾನು, ಕಂಪಿತ ಸ್ವರದಲ್ಲಿ ಉದ್ಗಾರವೆತ್ತಿದೆ. "ಇದೇನು? ಯಾರ ಲೀಲೆಯಿದು? ನಾನರಿಯೆ!"

ನನ್ನ ಮಾಸ್ಟರ್‌ಜಿ! ಈಗ ಕೂಲಿ!!

ಮಾಸ್ಟರ್‌ಜಿ ಮೌನವಾಗಿದ್ದರು. "ಮಾಸ್ಟರ್‌ಜೀ! ತಾವು ಹೇಗಾದರೂ........" ನಾನು ವಾಕ್ಯಗಳನ್ನು ಜೋಡಿಸಲೆತ್ನಿಸಿದೆ.

"ಮಾಸ್ಟರ್‌ಜೀಗಳೂ ಉದರಪೋಷಣ ಮಾಡಬೇಡವೇ? ನೀವು, ಹೊಟ್ಟೆಗಾಗಿ ೩೫೦ ಮೈಲು ದೂರ ಹೋಗುವಾಗ, ನಾನು ಮೂರುವರೆ ಫರ್ಲಾಂಗು ಸಹ ಹೋಗಬಾರದೇ?"—ಎಂದರು ಮಾಸ್ಟರ್‌ಜಿ.

"ಹಾಗಲ್ಲ........" ನಾನಂದೆ—ಅದೊಂದು ಸ್ವಪ್ನದಂತಾಗಿತ್ತು.

"ಹಾಗಲ್ಲದಿದ್ದರೆ ಮತ್ತೆ ನಾನು ಹಸಿವಿನಿಂದಿರಲಾದೀತೇ?—ಮಾಸ್ಟರ್‌ಜಿ, ಸೌಮ್ಯವಾಗಿ ಕೇಳಿದರು.

"ತಮ್ಮ ನೌಕರಿಯು ಕಾಯಂ ಆಗಿತ್ತಲ್ಲ?"

"ಅಹುದು."

"ಮತ್ತೇನಾಯಿತು?"

"ಅದೊಂದು ದುರ್ಭಾಗ್ಯ. ಹದಿನೈದು ರೂಪಾಯಿ ಪೆನ್ಶನ್ ಕೊಟ್ಟು ಕಳುಹಿಸಿದರು. ಆ ಹಣದಿಂದ ಏನು ತಿನ್ನಬಹುದು? ಹೇಗೆ ವಸ್ತ್ರ ಉಡಬಹುದು?"

ತಲೆ ಬಗ್ಗಿಸಿ, ನಾನದನ್ನು ಕೇಳಿದೆ. ಮಾಸ್ಟರ್‌ಜಿ ಮುಂದುವರಿದರು: "ಪೆನ್ಶನ್ ಯಾರಿಗೆ ಬೇಕಿತ್ತು? ನಾನು ಯಾವ ಅಪರಾಧವನ್ನೂ ಮಾಡಿರಲಿಲ್ಲ. ನೌಕರಿಗೆ ಅಯೋಗ್ಯ ಎನಿಸುವ ಕೆಲಸ ನನ್ನಿಂದಾಗಿರಲಿಲ್ಲ."

"ಕಾನೂನಿನ ಭಾವನೆ ನೋಡಲಿಲ್ಲವೇ? ಕಾನೂನಿನ ದೃಷ್ಟಿಯಿಂದ ಸಕಲರೂ ಸಮಾನ"—ಎಂದೆ ನಾನು, ಮೆಲ್ಲಗೆ.

"ಕಾನೂನು ಭಾವನೆ ನೋಡುವುದಿಲ್ಲ. ಹೊಸ ಹೊಸ ಕಾನೂನುಗಳು ಆಗುತ್ತಿರುತ್ತವೆ; ಅದೇ ಪರಿಮಾಣದಿಂದ ಹೊಸ ಹೊಸ ಅಪರಾಧಗಳು ಹೆಚ್ಚುತ್ತಲಿವೆ. ಮಾನವನು ಒಂದು ಯಂತ್ರವಲ್ಲ. ಕೇವಲ ನಿಶ್ಚಿತ ಕೆಲಸ ಮಾಡಲು ಮಾನವನಿಗೆ ಸಾಧ್ಯವಾಗದು. ಯಾವುದಾದರೂ ಕಾನೂನು ಸಫಲವಾಗಬೇಕಾದರೆ........" ಮಾಸ್ಟರ್‌ಜಿಯವರು ಹೇಳುತ್ತ ಹೇಳುತ್ತ, ತಟಸ್ಥರಾದರು.

ಮಾಸ್ಟರ್‌ಜಿಯವರಲ್ಲಿ ಪ್ರೇಮಭಾವನೆಯ ಸ್ವಭಾವವು ಇಂದಿನದಲ್ಲ, ಹಲವು ವರ್ಷಗಳಿಂದಲೂ ಇತ್ತು. ಏಳು ವರ್ಷದ ನನ್ನ ವಯೋಮಾನದಲ್ಲಿಯೂ ಅವರು ಇದೇ ಪ್ರಕಾರ ಅಂಟಿಸಿ ಮಾತಾಡುತಿದ್ದರು. ಅವರ ಮಾತುಗಳಲ್ಲಿ ಅಂದು ಇದ್ದ ಗೂಢತೆಯನ್ನು ಇಂದು ಸಹ ನಾನು ಕಂಡೆನು.

ಅಂದು ನಾನು ಹೈಸ್ಕೂಲಿನಲ್ಲಿ ಕಲಿಯುತ್ತಿದ್ದೆ. ಮಾಸ್ಟರ್‌ಜಿಯವರು ಎಂಟನೇ ಕ್ಲಾಸಿನಲ್ಲಿ ಗಣಿತ, ಒಂಭತ್ತನೇ ಕ್ಲಾಸಿನಲ್ಲಿ ಭೂಗೋಲ, ಮತ್ತು ಹತ್ತನೇ ಕ್ಲಾಸಿನಲ್ಲಿ ಹಿಂದೀ ಹೀಗೆ ಕಲಿಸಿದ್ದರು. ಹತ್ತನೇ ಕ್ಲಾಸಿನಲ್ಲಿ ಅಯೋಧ್ಯಾ ಕಾಂಡದ ಕೆಲವಂಶಗಳಿದ್ದುವು—ರಾಮವನಗಮನದ ವಿಷಯವಾಗಿತ್ತು. ಮಾಸ್ಟರ್‌ಜಿಯವರು ಇಡೀ 'ಪೀರಿಯಡ್' ಅಳುತ್ತಳುತ್ತ ಕಲಿಸುತಿದ್ದರು. ಬಹುಕಷ್ಟದಿಂದ 'ಪೀರಿಯಡ್' ಮುಗಿದೊಡನೆ, ಅನ್ಯ ಅಧ್ಯಾಪಕರು ಬಂದನಂತರವೇ ಅವರು ಎದ್ದು ಹೋಗುತಿದ್ದರು. ಮಾಸ್ಟರ್‌ಜಿಯವರನ್ನು ವಿದ್ಯಾರ್ಥಿಗಳು ದೂರುತ್ತಿದ್ದಿಲ್ಲ. ಅವರನ್ನು ಹೇಗೆ ದೂರಲ್ಕೆ

ಹೊರಗೆ ಸ್ವಲ್ಪ ಸ್ವಲ್ಪ ಮಳೆ ಬರುತಿತ್ತು. ಒಳಗೆ, ಮಾಸ್ಟರ್‌ಜಿಯು ವರ ಮತ್ತು ನನ್ನ ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಸುರಿಯುತಿತ್ತು. ಸ್ವಾಭಿಮಾನೀ ಮಾಸ್ಟರ್‌ಜೀಯುವರು ನನ್ನಿಂದ ನಜರು ಕಾಣಿಕೆಯನ್ನು ಸ್ವೀಕರಿಸಲಿಕ್ಕಿಲ್ಲವೆಂದು ನನಗೆ ಗೊತ್ತಿತ್ತು. ಹೀಗೆ ಹಣ ಕೊಡಲು ಉದ್ಯುಕ್ತನಾದರೆ, ಅವರಿಗೆ ಇನ್ನೂ ದುಃಖವಾದೀತು—ಎಂದು ನಡುಗುತ್ತ ಹೀಗೆಂದೆನು:—

"ನಾನು ಒಂದು ಮಾತು ಹೇಳಬಹುದೇ?"

"ಹೂಂ" ಎಂದರು ಮೆಲ್ಲಗೆ ಮಾಸ್ಟರ್‌ಜಿಯುವರು.

"ನಾನು ಮೂರು ವಾರಗಳೊಳಗೆ ತಿರುಗಿ ಮುಂಬಯಿಗೆ ಹೋಗು ವೆನು. ನೀವೂ ಬರಲು ಬಯಸಿದರೆ ನನಗೆ ಆನಂದವಾದೀತು"—ಎಂದು ಹೇಳಿದೆ.

"ನೀವು ವ್ಯರ್ಥವಾಗಿ ಕಷ್ಟಪಡುವಿರಿ. ನನಗೆ ಇಲ್ಲಿ ದುಃಖವೇನಿದೆ? ಮಕ್ಕಳಿಲ್ಲ, ಹೆಂಡತಿಯಿಲ್ಲ. ನಾನೊಬ್ಬನೇ. ಉದರಪೋಷಣೆಗೆ ಎರಡೂಟ ಇಲ್ಲದಿದ್ದರೆ ಒಂದಾವರ್ತಿಯಾದರೂ ಅನ್ನ ಸಿಗುವುದು. ಅನ್ನವಿಲ್ಲದಿದ್ದರೆ ಜೋಳವನ್ನಾದರೂ ಹೊಟ್ಟೆ ತುಂಬ ತಿನ್ನಬಹುದು."

"ಇದು ತಮ್ಮ ಪ್ರತಿಷ್ಠೆಗೆ ವಿರುದ್ಧವಲ್ಲವೇ?"

"ನನ್ನ....ನನ್ನ....ಪ್ರತಿಷ್ಠೆ? ಕೆಟ್ಟ ಕಾರ್ಯಗಳಿಂದ ಮಾತ್ರ ಪ್ರತಿಷ್ಠೆ ನಷ್ಟವಾಗುವುದು. ಶಾಸ್ತ್ರಗಳನುಸಾರ, ಆಪದ್ಧರ್ಮವನ್ನು ಸ್ವೀಕಾರ ಮಾ ಡಲು ಯಾವ ಹಾನಿಯೂ ಇಲ್ಲ."

"ನಾನು ತಮ್ಮ ಕಾಲಿಗೆ ಬೀಳುತ್ತೇನೆ"—ಎಂದು ಹೇಳುತ್ತ, ನಿಜವಾ ಗಿಯೂ ನನ್ನ ಕೈಗಳು ಅವರ ಕೆಸರು ತುಂಬಿದ ಚರಣಗಳ ಕಡೆಗೆ ಬಗ್ಗಿ ಹೋದವು.

"ನಾನು ತಮ್ಮಲ್ಲಿಗೆ ನಾಳೆ ಬರುವೆನು. ತಾವು ಅಲ್ಲಿಯೇ ಇರುತ್ತೀ ರಲ್ಲ" ಎಂದು ನಾನು ಹೇಳಿದೆ.

"ಇಷ್ಟು ದೊಡ್ಡ ಊರಿನಲ್ಲಿ ನನಗೆ ಸ್ಥಾನವೆಲ್ಲಿದೆ? ನೀವು ನಾಳೆ ಬನ್ನಿರಿ. ನಾಲ್ಕು ಗಂಟೆಯ ಮುಂಚಿತವಾಗಿ ಬರಬೇಡಿರಿ."

ಹಿಂದೆ ನೋಡದೆ ಮಾಸ್ಟರ್‌ಜಿಯುವರು ಹೊರಟುಹೋದರು.

o o o o

ಪ್ರಯಾಣದ ದಣುವಿನಿಂದ ಕೆಲ ಹೊತ್ತು ಮಗ್ಗಲು ಬದಲಿಸಿ ಹೊಳ ಳಾಡಿದರೂ ನನಗೆ ನಿದ್ರೆ ಬರಲಿಲ್ಲ. ನಾಲ್ಕಕ್ಕೇ ಮಾಸ್ತರ್‌ಜಿಯುವರಲ್ಲಿಗೆ ಹೋಗಬೇಕೆಂದು ನಾನು ನಿಶ್ಚಯುಮಾಡಿದ್ದೆ. ಅದರಂತೇ, ಹೋದೆ.

"ಮಾಸ್ತರ್‌ಜೀ!"—ಅವರ ಕೋಣೆಯು ಬಾಗಿಲಿನ ಮೇಲೆ ಖಟ ಖಟ ಶಬ್ದ ಮಾಡಿದೆ. ಒಬ್ಬನು ಹೊರಗೆ ಬಂದನು, ಮತ್ತು ಹೇಳಿದನು: "ಅವರು ಇಲ್ಲೆ ವಾಸಿಸುತಿದ್ದರು. ಇಂದು ಬೆಳಗ್ಗೆ ಇದನ್ನು ಬಿಟ್ಟುಬಿಟ್ಟು ತೀರ್ಥ ಯಾತ್ರೆಗೆ ಹೊರಟುಹೋದರು. ಏನು ಹುಚ್ಚು! ಯಾವ ತೀರ್ಥ ಯಾತ್ರೆಗೆ ಎಂದು ಹೇಳದೆನೇ ಹೋದರು. ನೀವು ಜಗನ್ನಾಥ ಮಾಸ್ತರ್‌ಜಿಯುವರ ಸ್ವಭಾವ ಅರಿತಿರಬಹುದು. ನೌಕರಿ ಹೋದ ನಂತರ ಮಾಸ್ತರ್‌ಜಿಯುವ ರಿಗೆ ಸಹಾಯು ನೀಡಲು ಅನೇಕರು ಬಂದಿದ್ದರು. ದೃಢಪ್ರತಿಜ್ಞೆಯು ಮಾ ಸ್ತರ್‌ಜಿಯುವರು ಯಾರಿಂದಲೂ ಸಹಾಯುವನ್ನು ಸ್ವೀಕರಿಸಲಿಲ್ಲ.

"ಏನನ್ನಾದರೂ ಹೇಳಿ ಹೋದರೇ?"

"ಅಹುದು. 'ನಾಲ್ಕು ಗಂಟೆಗೆ ಒಬ್ಬ ಪ್ರೊಫೆಸರರು ಬರುವರು ಅವರಿಗೆ ನನ್ನ ಆಶೀರ್ವಾದ ಹೇಳು'—ಎನ್ನುತ್ತ ಹೊರಟು ಹೋದರು."

ನಾನು ಆ ಸಮುಯ ಸೂಟ್ ಹಾಕಿಕೊಂಡಿದ್ದರೂ, ಅಶಾಂತಿಯು ಅನುಭವವನ್ನು ಹೊಂದಿದೆ. ಸೀಳಿದ ಕೋಟು, ಚೂರಾದ ಧೋತಿ ಉಟ್ಟು ಕೊಂಡ ಮಾಸ್ತರ್‌ಜೀಯುವರಲ್ಲಿ ಎಷ್ಟು ಶಾಂತಿಯಿತ್ತು! ಎಷ್ಟು ಸ್ವಾಭಿ ಮಾನವಿತ್ತು! ದೇವರ ಅನುಗ್ರಹದಿಂದ ಅದರ ಒಂದಂಶವಾದರೂ ನನ್ನಲ್ಲಿ ಇದ್ದುದಾದರೆ ನನಗೆ ಎಷ್ಟು ಸುಖವಿತ್ತು!

▪▪▪▪▪▪▪▪▪

## ೩. ಸಮತೆ ಮತ್ತು ವಿಷಮತೆ

### (ಅಮೃತ ಮತ್ತು ವಿಷ.)

ಆಂಧ್ರ ಪ್ರಾಂತದ ಒಂದು ಹಳ್ಳಿಯಲ್ಲಿ ಒಬ್ಬ ಬಡ ವೈಶ್ಯನಿದ್ದನು. ಅಲ್ಲಿ ಒಮ್ಮೆ ಭಯುಂಕರ ದುಷ್ಕಾಲವು ಬಂದೊದಗಿತು. ಅನ್ನದ ಅಭಾವ ದಿಂದ ಜನರು ಮೃತ್ಯುವಿಗೀಡಾಗುತ್ತ ಬಂದರು. ಬಡ ವೈಶ್ಯನು ಸಹ ವಿಪತ್ತಿನಲ್ಲಿ ಬಿದ್ದನು. ಕೆಲ ದಿನಗಳ ವರೆಗೆ ಹೇಗೂ ಕಾಲ ಕಳೆದು, ಮತ್ತೆ ತನ್ನ ಪರಿವಾರದ ಪೋಷಣೆಗೆ ಉಪಾಯುಗಾಣದೆ, ಮನೆಯುವರಿಗೆ ಕೆಲ ದಿನ ಗಳ ವ್ಯವಸ್ಥೆ ಮಾಡಿ, ತಾನು ಹೊರಟು ಹೋದನು.

ಆ ವೈಶ್ಯನಿಗೆ ಬಾಲ್ಯದ ಒಬ್ಬ ಅಚ್ಚುಮೆಚ್ಚಿನ ಮಿತ್ರನಿದ್ದನು. ಅವನು ಆಸ್ಸಾಮಿನಲ್ಲಿ ವ್ಯಾಪಾರ ಮಾಡುತಿದ್ದನು. ಬಡ ವೈಶ್ಯನಿಗೆ ಅವನ ನೆನಪಾಗಿತ್ತು. ವಿಪತ್ಕಾಲದಲ್ಲಿ ಮಿತ್ರನ ಆಶ್ರಯವನ್ನು ಹೊಂದಿ ವಿಪತ್ತಿನಿಂದ ಪಾರಾಗಬೇಕೆಂದು ನೆನಸಿ, ಆಸ್ಸಾಮನ್ನು ಸೇರಿದನು.

ವೈಶ್ಯನು, ಮಿತ್ರನಿದ್ದ ಊರನ್ನು ಸೇರಿ, ಮಿತ್ರನನ್ನು ಭೇಟಿಯಾದನು. ಆ ಮಿತ್ರನು ಸಹಜವಾಗಿ ತನ್ನನ್ನು ಗೌರವಿಸಿ, ದುಃಖ ಸಮಯದಲ್ಲಿ ಕೆಲ ಕಾಲ ಅವನಲ್ಲಿ ನಿಲ್ಲಿಸಿಕೊಂಡು, ಸ್ಥಾನಮಾನ ಸುಖಗಳನ್ನೀಯುವನೆಂದು ಬಡ ರೈತನಿಗೆ ಪೂರ್ಣ ವಿಶ್ವಾಸವಿತ್ತು. ಧನಿಕ ಮಿತ್ರನು ಅವನನ್ನು ಸ್ವಾಗತಿಸಿದನು. ಆದರೆ, ಅವನ ಮುಖದಲ್ಲಿ ಪ್ರಫುಲ್ಲತೆಯ ಬದಲಾಗಿ ಸಿಟ್ಟು ಮತ್ತು ಅಸಂತೋಷದ ರೇಖೆಗಳು ಕಾಣಿಸುತ್ತಿದ್ದುವು. ಬಡ ವೈಶ್ಯನು ದುಃಖಿಯಾಗಿದ್ದನು. ಅವನು ಸಂಕ್ಷೇಪವಾಗಿ, ಬಹು ಕರುಣ ಶಬ್ದಗಳಲ್ಲಿ ತನ್ನ ಸಕಲ ವೃತ್ತಾಂತವನ್ನು ಹೇಳಿ, ಆಶ್ರಯವನ್ನು ಕೋರಿದನು ಮತ್ತು ಹೀಗೆಂದನು: "ಮಿತ್ರನೇ, ಮನೆಯಲ್ಲಿ ನಿನ್ನ ಅತ್ತಿಗೆ (ಅಂದರೆ ತನ್ನ ಹೆಂಡತಿ) ಮತ್ತು ಮಕ್ಕಳು ಹಸಿವಿನಿಂದ ಬಳಲುತಿದ್ದಾರೆ. ಅವರಿಗಾಗಿ, ಈ ದಿನವೇ ಸ್ವಲ್ಪ ಹಣ ಕಳಿಸಿಕೊಡುವ ಅವಶ್ಯಕತೆಯಿದೆ. ನನಗೆ ಒಂದು ಕೆಲಸವನ್ನು ಸಂಪಾದಿಸಿ, ಪ್ರತಿ ತಿಂಗಳಲ್ಲಿ ಮನೆಗೆ ಸ್ವಲ್ಪ ಹಣ ಕಳಿಸಬೇಕಾಗಿದೆ."

ಧನಿಕನು ದೀರ್ಘಶ್ವಾಸವನ್ನೆಳೆದು ಹೇಳಿದನು: "ಮಿತ್ರನೇ, ನೀನು ಅನ್ನುವುದು ನಿಜ. ನಾನು ನಿನ್ನ ಸೇವೆಯನ್ನು ಸ್ವಲ್ಪವಾದರೂ ಮಾಡಲೇಬೇಕಾಗಿದೆ. ಆದರೆ, ಆ ಸ್ವಲ್ಪವನ್ನಾದರೂ ನೀಡುವಷ್ಟು ಸಂಪಾದನೆ ನನಗಿಲ್ಲ; ನಿನಗಾಗುವ ಕೆಲಸವೂ ನನ್ನಲ್ಲಿಲ್ಲ. ಮನೆಗಳ ಬಾಡಿಗೆ, ವ್ಯಾಪಾರದ ಲಾಭ—ಒಟ್ಟುಕೂಡಿ ನನಗೆ ವರ್ಷಕ್ಕೆ ಬರುವ ಆಯವು ತೀರ ಅಲ್ಪ. ಇಂದು ಬರಗಾಲ; ನನ್ನ ಮಾನ-ಗೌರವಗಳ ಅನುಸಾರ ಖರ್ಚು ಮಾಡಬೇಕಾಗುತ್ತದೆ. ಪರಿವಾರವಿದೆ, ಗುಮಾಸ್ತರಿದ್ದಾರೆ. ಕಠಿನತೆಯಿಂದ ಕಾರ್ಯನಿರ್ವಹಣವಾಗುತ್ತಿದೆ. ಇದನ್ನು ನೀನು ಅರಿತಿರುವಿ. ನಿನ್ನ ಮತ್ತು ನಿನ್ನ ಪರಿವಾರದ ಭರಣ ಪೋಷಣ ಮಾಡುವ ಶಕ್ತಿ ನನ್ನಲ್ಲಿ ಎಲ್ಲಿದೆ? ನೀನೇ ಹೇಳು. ವಿವಶನಾಗಿ, ಇದನ್ನು ಹೇಳಲು ಖೇದಗೊಳುತಿದ್ದೇನೆ. ಇಂದು ನಿನಗೆ ಸಹಾಯ ಮಾಡಲು ನಾನು ಸಮರ್ಥನಲ್ಲ. ನೀನು ಬೇರಾವುದಾದರೂ ಮಾರ್ಗವನ್ನು ಯೋಚಿಸಬೇಕು."

ಬಡ ವೈಶ್ಯನು ಉದಾಸನಾಗಿ ಹೀಗೆಂದನು: "ಮಿತ್ರನೇ! ನನಗೆ ಇಲ್ಲಿ ಯಾರೂ ಪರಿಚಿತರಿಲ್ಲ. ಕೇವಲ ನಿನ್ನಲ್ಲಿ ಭರವಸೆಯಿರಿಸಿ ಬಂದಿರುವೆನು. ನನ್ನ ಖರ್ಚು ಎಂಥದು? ಈ ಸಮಯ ಐವತ್ತು ರೂಪಾಯಿಗಳನ್ನು ಊರಿಗೆ ಕಳಿಸಬೇಕಾಗಿದೆ. ತಿಂಗಳಿಗೆ ೫೦—೬೦ ರೂಪಾಯಿ ವೇತನ ದೊರೆತರೆ ನನ್ನ ಕೆಲಸವಾಗುವುದು. ಅದರಲ್ಲಿ ಸ್ವಲ್ಪ ಖರ್ಚು ಮಾಡಿ, ಉಳಿದುದನ್ನು ಮಕ್ಕಳಿಗೆ ಕಳಿಸುವೆನು. ಸಾವಿರಾರು ರೂಪಾಯಿ ಆದಾಯವಿರುವ ನಿನಗೆ ನನ್ನ ಈ ಖರ್ಚು ಹೆಚ್ಚಾಗಲಾರದು, ಹೊರೆಯಾಗಲಾರದು. ನಾನು ಕಾರ್ಯಪ್ರವೃತ್ತನಾಗಿಯೇ ಮಜೂರಿ ಪಡೆಯಲು ಇಚ್ಛಿಸುತ್ತೇನೆ."— ಇದನ್ನು ಹೇಳುತ್ತ ಅವನ ನಯನಗಳಲ್ಲಿ ದುಃಖಾಶ್ರುಗಳು ಕಾಣಿಸಿಕೊಂಡುವು.

ಧನಿಕನು ತನ್ನ ಮಿತ್ರನ ಕಣ್ಣುಗಳನ್ನು ನೋಡುತ್ತಿದ್ದರೂ, ಅವನ ಹೃದಯವು ದ್ರವಿಸಲಿಲ್ಲ. ಮತ್ತೊಮ್ಮೆ ಧನಿಕನು ಕಪಟ ವಿನಯದಿಂದ ಹೀಗೆಂದನು: "ಮಿತ್ರನೇ! ನೀನು ಹೇಳುವುದು ಸರಿ. ಆದರೆ, ನಾನು ಲಾಚಾರಾಗಿದ್ದೇನೆ. ನೀನು ಬೇರೆ ಉಪಾಯವನ್ನು ಕಂಡುಹಿಡಿಯಬೇಕಾಗಿದೆ. ನಿನ್ನ ಕೆಲಸದ ವ್ಯವಸ್ಥೆಯಾಗುವ ತನಕ ನಾಲ್ಕಾರು ದಿನ ನೀನು ಇಲ್ಲಿ ನಿಲ್ಲಬಹುದು. ನನ್ನ ಮನೆಯಲ್ಲೆ ಊಟ ವ್ಯವಹಾರ ಮಾಡಬೇಕು. ಈಗ ಸ್ನಾನ ಮಾಡುವವನಾಗು. ಊಟ ಸಿದ್ಧವಾಗಿದೆ." ಇಷ್ಟನ್ನು ಹೇಳಿ ಧನಿಕನು ತನ್ನ ಕಾರ್ಯದಲ್ಲಿ ನಿರತನಾದನು. ಬಡ ವೈಶ್ಯನು ನಿಸ್ಸಹಾಯಕನಾಗಿ, ಮನಸ್ಸಿನಲ್ಲಿಯೇ ವಿಚಾರಮಗ್ನನಾಗಿ, ಸ್ನಾನಕ್ಕೆ ಹೊರಟು ಹೋದನು.

ಧನಿಕನು ಶುಷ್ಕ ಹಾಗೂ ಜಿಪುಣನಾಗಿದ್ದನು. ಅವನ ಪತ್ನಿಯು ಅವನಿಗಿಂತಲೂ ಶುಷ್ಕ ಹಾಗೂ ಜಿಪುಣಳಾಗಿದ್ದಳು. ಅವಳಲ್ಲಿ ಬೇರೆ ಯಾವ ಶೋಭೆಯೂ ಇರಲಿಲ್ಲ. ಪತಿಯು ಸಭ್ಯತಾವಶನಾಗಿ ಒಮ್ಮೊಮ್ಮೆ ಸ್ವಲ್ಪವಾದರೂ ಸಹಿಸುತ್ತಿದ್ದನು. ಆದರೆ, ಪತ್ನಿಯಾದರೋ ಪತಿಯನ್ನು ಸಹ ಆಗಾಗ್ಗೆ ಗದರಿಸುತಿದ್ದಳು. ಮನೆಗೆ ಬಂದ ಪರಿಚಿತ ಬಾಲ್ಯಮಿತ್ರನಿಗೆ ಸಭ್ಯತೆಯಿಂದ ಭೋಜನ ಮಾಡಿಸಲೇ ಬೇಕಾಗಿದೆ! ಒಳಗೆ ಬಂದು, ಪತ್ನಿಯೊಡನೆ ಹೀಗೆಂದನು: "ಆಂಧ್ರದಿಂದ ನನ್ನ ಒಬ್ಬ ಹಳೇ ಮಿತ್ರನು ಬಂದಿರುವನು. ಅವನ ಊಟಕ್ಕೆ ಸಾಧ್ಯವಿದ್ದಷ್ಟು ಉತ್ತಮ ಪದಾರ್ಥಗಳನ್ನು ತಯಾರಿಸಿ, ಆದರಪೂರ್ವಕ ಬಡಿಸಬೇಕು! ಅತಿಥಿ ಸತ್ಕಾರದ ಧರ್ಮ!"

ಪರಂಪರೆಯಿಂದ ಅತಿಥಿ ಸತ್ಕಾರದ ವಿಷಯವು ಅವಳಿಗೆ ತಿಳಿದಿತ್ತು. ಪತ್ನಿಯು ಕೆರಳದಂತೆ, ಅವನು ಆ ಯುಕ್ತಿಯನ್ನೇ ಮುಂದಿಟ್ಟಿದ್ದನು. ಆದರೆ, ಆ ದೇವಿಯ ಮೇಲೆ,ಅದರ ಪ್ರಭಾವವು ಹೇಗೆ ಬಿದ್ದೀತು? ಅವಳು ಸಿಡುಕಿನಿಂದ ಹೀಗಂದಳು: "ನಿನ್ನ ಮಿತ್ರ ಹಾಗೂ ಅತಿಥಿ ಹಾಳಾಗಲಿ! ಒಲೆ ಊದಿ ಯೂದಿ ಕಣ್ಣುಗಳು ಒಡೆದುಹೋದುವು. ಇಂದು ಮಿತ್ರ, ನಾಳೆ ಅತಿಥಿ, ನಾಡದು ವ್ಯಾಪಾರಿ-ದಿನಾಗಲೂ ಒಂದೊಂದು ಆಪತ್ತು ಬಂದೊದಗುತ್ತಿದೆ. ಈ ಗೃಹಸ್ಥಧರ್ಮದಿಂದ ನಾನು ಸದಾ ಪೀಡಿತಳಾಗಿದ್ದೇನೆ. ನನ್ನಿಂದಾಗದು."

ಪತಿಯು ಸಂಕೋಚದಿಂದ ಮೆಲ್ಲನೆ ಹೀಗಂದನು: "ಮೆಲ್ಲಗೆ ಮಾತಾಡು. ನನ್ನ ಮಿತ್ರನು ಹೊರಗೇ ನಿಂತಿರುವನು. ಕೇಳಿದರೆ—ಬೇಸರ!"

ಅವಳು ರೇಗಿ ಹೀಗೆಂದಳು: "ಹಾಗಾದರೆ ಇನ್ನೂ ಒಳ್ಳೆಯದು. ವಿಪತ್ತು ಬೇಗನೇ ಪರಿಹಾರವಾದೀತು."

ಪತಿಯು ಪತ್ನಿಯ ಮಹತ್ವವನ್ನು ಗೌರವಿಸಿ, ಅವಳನ್ನು ಸಮಾಧಾನ ಪಡಿಸಿದನು: "ನೋಡು! ನಾನು ಅವನೊಡನೆ ಮುಂಚಿತವಾಗಿ ಹೇಳಿರುವೆನು—ನನ್ನಲ್ಲಿ ಕೆಲಸವಿಲ್ಲವೆಂದು. ಅವನಿಗೆ ಬೇರಾವುದಾದರೂ ಉಪಾಯ ಕಂಡುಹಿಡಿಯಲು ಸೂಚಿಸಿದ್ದೇನೆ. ನಾಲ್ಕಾರು ದಿನಗಳಲ್ಲಿ ಹೊರಟು ಹೋಗುವನು. ಅಷ್ಟರತನಕ ಹೇಗಾದರೂ ಮರ್ಯಾದಾನುಸಾರ ಅವನಿಗೆ ಭೋಜನಮಾಡಿಸಬೇಕಾಗಿದೆ." ಇದನ್ನೊಪ್ಪಿ ಪತ್ನಿಯು ಭೋಜನ ತಯಾರಿಸಿದಳು. ಆದರೂ, ಸಂಕಷ್ಟವೆಂದು ಭಾವಿಸುತಿದ್ದಳು.

ಭೋಜನವು ತಯಾರಾದ ಕೂಡಲೇ, ಅತಿಥಿಯೊಡನೆ ಧನಿಕನು ಒಳಗೆ ಬಂದನು. ಆದರೆ, ಪತ್ನಿಯು ಅಂದಳು: "ಮುಂಚಿತವಾಗಿ ನಿನ್ನ ಮಿತ್ರನು ಭೋಜನಮಾಡಲಿ. ಅತಿಥಿಯೇ ಮುಂಚಿತವಾಗಿ ಉಣ್ಣಬೇಕಷ್ಟೆ?" ಪತಿಯು ಇದಕ್ಕೆ ಸಮ್ಮತಿಸಿದನು. ಅವಳು, ಬಡ ವೈಶ್ಯನಿಗೆ ಬಡಿಸಿದಳು. ಊಟದಲ್ಲಿ ಸಕ್ಕರೆ ಹಾಕಿದ ಪದಾರ್ಥವೂ ಇತ್ತು. ಕೆಲವು ಕಾಯಿಪಲ್ಯಗಳೂ ಮೊಸರೂ ಇದ್ದುವು. ಆದರೆ, ಭೋಜನಮಾಡುವವನ ಮುಖದ ಮೇಲೆ ಯಾವ ಉಲ್ಲಾಸವೂ ಇರಲಿಲ್ಲ; ಅವನಲ್ಲಿ ಶುಷ್ಕತ್ವ ಹಾಗು ವಿಷಾದವು ಕಾಣಿಸುತಿತ್ತು. ಬಡ ಅತಿಥಿಯು ಮೌನದಿಂದ ಭೋಜನಮಾಡಿದನು. ಆ ಮೇಲೆ, ಲಘು ಶಂಕೆಗೋಸ್ಕರ ಹೊರಗೆ ಹೋದನು. ಒಳಗೆ ಪತ್ನಿಯು

ಪತಿಗೆ ಭೋಜನ ಬಡಿಸಿದಳು. ಅದರಲ್ಲಿ, ಅತಿಥಿಗೆ ಬಡಿಸದೆ ಇರುವ ಅನೇಕ ಪದಾರ್ಥಗಳಿದ್ದುವು. ಬಡ ವೈಶ್ಯನು ಪುನಃ ■ ದಾರಿಯಾಗಿಯೇ ಮನೆಯೊಳಗೆ ಪ್ರವೇಶಿಸಿದಾಗ, ಸಹಜವಾಗಿ ತನ್ನ ಮಿತ್ರನ ಹರಿವಾಣದ ಕಡೆಗೆ ಅವನ ದೃಷ್ಟಿಹೋಯಿತು. ಅದರಲ್ಲಿ, ತನಗೆ ಬಡಿಸಿರದ ಇತರ ಎಷ್ಟೋ ಉತ್ತಮ ಪದಾರ್ಥಗಳಿದ್ದುದು ಅವನಿಗೆ ಕಂಡಿತು. ಇದನ್ನೆಲ್ಲ ನೋಡಿ, ಅವನಿಗೆ, "ಈ ವಿಷಮತೆಯ ಕಾರಣದಿಂದಲೇ ಧನಿಕನು ತನ್ನೊಡನೆ ಭೋಜನಮಾಡಲಿಲ್ಲ"ವೆಂದು ತಿಳಿಯಿತು. ವೈಷಮ್ಯಜನಿತ ಸಂತಾಪವು ಹೆಚ್ಚಿ, ಹೊರಗೆ ಹೋದನು.

ರಾತ್ರೆ ಬಂತು. ಧನಿಕ ಮಿತ್ರನು ಪತ್ನಿಯೊಡನೆ, "ಅತಿಥಿಯು ನಿದ್ರಿಸಬೇಕು ಎಲ್ಲಿ?" ಎಂದು ಪ್ರಶ್ನಿಸಿದನು. ಅವಳು ರೇಗಿ, "ಅದನ್ನು ಸಹ ನನ್ನೊಡನೆ ಕೇಳಬೇಕೆ?" ಎಂದಳು. ಕೊನೆಗೆ, ಹೊರಜಗುಲಿಯಲ್ಲಿ ಅವನಿಗೆ ಒಂದು ಹಾಸಿಗೆ ಹಾಕಿಕೊಟ್ಟರು. ರಾತ್ರೆಯೆಲ್ಲ ಸೊಳ್ಳೆ, ತಗಣೆ! ನಿದ್ರೆಯಿಲ್ಲದೆ ಅವನು ರಾತ್ರೆ ಕಳೆದನು.

ಮರುದಿನ ಬೆಳಗ್ಗೆ ಬಡ ವೈಶ್ಯನು, ಮನೆಯಿಂದ ಹೊರಟು, ಪೇಟೆಯ ಕಡೆಗೆ ಹೋದನು. ಮಾರ್ಕೆಟಿನ ಬಳಿ ಚೌಕವನ್ನು ಸೇರಿದೊಡನೆ, ಅವನು ತನ್ನ ಊರಿನ ಒಬ್ಬ ಪರಿಚಿತನನ್ನು ಕಂಡನು. ಅವನು ಸಹ ಬಹು ಬಡವನಾಗಿದ್ದನು. ಆದರೆ ಸಹೃದಯಿಯಾಗಿದ್ದನು. ನೋಡಿದ ಕೂಡಲೇ ವೈಶ್ಯನ ಬಳಿಗೆ ಓಡಿಬಂದು, ಬಹು ಪ್ರೇಮ ಹಾಗು ಉಲ್ಲಾಸದಿಂದ ಕೇಳಿದನ: "ಬಂಧೂ! ಇಲ್ಲಿಗೆ ಯಾವಾಗ ಬಂದೆ? ನನಗೇಕೆ ತಿಳಿಸಲಿಲ್ಲ? ನನಗೆ ತಿಳಿದಿದ್ದರೆ, ಸ್ಟೇಷನಿಗೆ ಬಂದು ನಿನ್ನನ್ನು ಕರತರುತಿದ್ದೆ. ಇಲ್ಲಿಗೆ ಬಂದನಂತರವೂ ನನಗೆ ಈ ವಿಷಯವನ್ನು ತಿಳಿಸಲಿಲ್ಲ! ಈಗ ಎಲ್ಲಿರುತ್ತಿ? ಬಾ, ನನ್ನ ಮನೆಗೆ ಹೋಗೋಣ. ನಾನು ನಿನ್ನ ಸಾಮಾನುಗಳನ್ನು ನಿನ್ನ ಮನೆಗೆ ಒಯ್ಯುವೆನು. ನಿನ್ನನ್ನು ಭೇಟಿಯಾದುದು ನನ್ನ ದೊಡ್ಡ ಭಾಗ್ಯ. ವಿದೇಶದಲ್ಲಿ ನಮ್ಮ ಊರಿನ ಪ್ರೇಮಿ ಪುರುಷನು ಹೇಗೆ ಸಿಗುವನ?"

ಶುದ್ಧ ಪ್ರೇಮ ಮಯ ವಾಣಿಯನ್ನು ಕೇಳಿ, ಬಡ ವೈಶ್ಯನ ಹೃದಯವು ಪ್ರಮಿಸಿತು. ಅವನಿಗೆ ಮಹತ್ತಾದ ಆಶ್ವಾಸನವು ಸಿಕ್ಕಿತು. ಅವನು ತನ್ನ ಸಕಲ ವೃತ್ತಾಂತವನ್ನು ಹೇಳಿದನು. ಮುಳುಗಿದವನಿಗೆ ಸಹಾಯವು

ಸಿಕ್ಕಿತು. ವೈಶ್ಯನು ಅಂದನು: "ನನ್ನ ಸಾಮಾನುಗಳೆಂದರೆ ಒಂದು ಧೋತಿ, ಒಂದು ಕೈವಸ್ತ್ರ, ಒಂದು ಜಮಖಾನು ಮತ್ತು ಒಂದು ಲೋಟ ಮಾತ್ರ ಆಗಿವೆ. ಅವುಗಳನ್ನು ಆ ಧನಿಕನಲ್ಲಿ ಇಟ್ಟಿರುವೆನು."

ಆ ಬಡ ಪರಿಚಿತನು ಹೀಗಂದನು: "ಆ ಧನಿಕನು ಬಹು ದೊಡ್ಡ ಶ್ರೀಮಂತನು. ನನ್ನನ್ನು ನಿನ್ನವನೆಂದು ಭಾವಿಸುವುದಾದರೆ, ನೀನು ನನ್ನ ಮನೆಗೆ ಬರಬೇಕಾಗಿದೆ. ನನ್ನ ಮನೆಯಲ್ಲಿ ಆರಾಮವಾಗಿ ನಿಲ್ಲಬಹುದು. ನಮ್ಮಲ್ಲಿನ ಊಟ-ತಿಂಡಿಗಳು ನೀರಸವಾಗಿರಬಹುದು. ಆದರೆ, ನನ್ನಂತೆ ತಿಂದು ಇರಬಹುದು. ನೀನು ನನ್ನಲ್ಲಿ ಬಂದರೆ ನಾವಿಬ್ಬರಾದೆವು. ಇಮ್ಮಡಿ ಕೆಲಸವನ್ನು ಮಾಡಬಲ್ಲೆವು. ನಮ್ಮ ಆದಾಯವು ಸಹ ಇಮ್ಮಡಿಗಿಂತ ಹೆಚ್ಚಾಗುವುದು. ಪರಿಶ್ರಮದ ಮತ್ತು ಸತ್ಯದ ಕೆಲಸವಾಗಿದೆ. ಪರಿಶ್ರಮಕ್ಕೆ ತಕ್ಕ ಲಾಭವಿದೆ. ಐವತ್ತು ರೂಪಾಯಿಗಳನ್ನು ಪ್ರತಿ ತಿಂಗಳಿಗೆ ನೀನು ಮನೆಗೆ ಕಳಿಸಬಹುದು; ಅದಕ್ಕಿಂತಲೂ ಹೆಚ್ಚು ದೊರೆವಂತೆ ಪ್ರಯತ್ನಿಸಲೂ ಬಹುದು. ನೀನು ಗಾಬರಿಯಾಗಬೇಡ. ಭಗವಾನನು ಬಡವರನ್ನು ಸಂರಕ್ಷಿಸುವುದು ಖಂಡಿತ. ನನ್ನೊಡನೆ ಮುಂಚಿನ ಉಳಿತಾಯ ಐವತ್ತು ರೂಪಾಯಿಯಿದೆ. ಇದನ್ನು ತೆಗೆದುಕೊಂಡು, ನಿನ್ನ ಮನೆಗೆ ಈಗಲೇ ಕಳಿಸು."

ಇದನ್ನು ಹೇಳಿ ಊರಿನ ಪರಿಚಿತನು ವೈಶ್ಯನನ್ನು ತನ್ನ ಮನೆಗೆ ಕರ ಕೊಂಡು ಹೋದನು. ಸಣ್ಣ ತಗಡಿನ ಮಾಡು ಇರುವ ಮಣ್ಣಿನ ಚಿಕ್ಕ ಮನೆಯಾಗಿತ್ತು. ಆದರೆ, ಅದು ಚೊಕ್ಕಟ ಹಾಗೂ ನಿರ್ಮಲವಾಗಿತ್ತು; ಮತ್ತು ಅದರ ಹೊರಗೆ, ಸಣ್ಣದೊಂದು ಅಂಗಡಿ ಇತ್ತು. ಹೋದೊಡನೆ, ಐವತ್ತು ರೂಪಾಯಿ ತೆಗೆದುಕೊಟ್ಟು ಮನಿಯಾರ್ಡರ್ ಮಾಡಿಸಿದನು. ಆಗ, ನಿಸ್ಸಹಾಯ ದುಷ್ಕಾಲಪೀಡಿತನಿಗೆ ಆದ ಸುಖ ಹಾಗೂ ಆಶ್ವಾಸನವು ಚಿಂತನೀಯವಾಗಿದೆ. ಇದನ್ನು ವಿವರಿಸಲು ಅಸಾಧ್ಯವಾಗಿದೆ. ಅನಂತರ, ಇಬ್ಬರೂ ಧನಿಕನಲ್ಲಿ ಹೋಗಿ ವೈಶ್ಯನ ಸಾಮಾನುಗಳನ್ನು ತಂದರು.

ಮನೆಗೆ ಬಂದೊಡನೆ, ಪರಿಚಿತನು ತನ್ನ ಪತ್ನಿಯೊಡನೆ ಹೀಗಂದನು:– "ನನ್ನ ಊರಿನ ಒಬ್ಬ ಸಜ್ಜನನು ಬಂದಿರುವನು, ಅವನಿಗೆ ಭೋಜನ ಮಾಡಿಸಬೇಕಾಗಿದೆ." ಸಾಧ್ವೀಪತ್ನಿಯು ಪ್ರಸನ್ನಳಾಗಿ, ಬಹುಪ್ರೇಮದಿಂದ ಭೋಜನವನ್ನು ತಯಾರಿಸಿದಳು. ಅಸ್ವಾಮಿನಲ್ಲಿ ಜೋಳವಿಲ್ಲದಿದ್ದರೂ

ಅಕ್ಕಿಯು ಅಗ್ಗವಾಗಿತ್ತು. ದೊಡ್ಡ ಅಕ್ಕಿಯ ಅನ್ನ, ಸಾಧಾರಣ ಸೊಪ್ಪಿನ ಪದಾರ್ಥ-ಕಾಯಿಪಲ್ಯ, ಒಣ ರೊಟ್ಟಿ ಮತ್ತು ಮಜ್ಜಿಗೆ-ಇವೆಲ್ಲ ಸಿದ್ಧವಾದುವು. ಯಜಮಾನಿಯು ಇಬ್ಬರಿಗೂ ಬಹು ಆದರದಿಂದ ಭೇದವಿಲ್ಲದೆ ಸಮಾನಭಾವದಿಂದ ಭೋಜನ ಮಾಡಿಸಿದಳು. ಬಹುಪ್ರೇಮದಿಂದ ಅತಿಥಿಗಳಿಗೆ ಅನೇಕಾವರ್ತಿ ಆಗ್ರಹ ಮಾಡಿ ಬಡಿಸಿದಳು. ಇಂದು ವೈಶ್ಯನಿಗೆ ಭೋಜನ ಮಾಡುವುದರಲ್ಲಿ ಬಹು ತೃಪ್ತಿಯಾಯಿತು. ಬಹು ಸುಖವು ಸಿಕ್ಕಿತು. ಪ್ರೇಮದ ಶುಷ್ಕರೊಟ್ಟಿಯಿಂದ ಪರಿಣಮಿಸುವ ಆನಂದವು ಪ್ರೇಮರಹಿತ ಮೃಷ್ಟಾನ್ನದಲ್ಲಿ ಎಂದೆಂದಿಗೂ ಇರಲಾರದು.

ರಾತ್ರಿಯಲ್ಲಿ ತನ್ನ ಸನ್ಮಾನ್ಯ ಅತಿಥಿಗೆ ನಿದ್ರಿಸುವುದಕ್ಕೆ, ಆ ಬಡ ಅಂಗಡಿಯವನು ಒಂದು ಹಗ್ಗದಿಂದ ತಯಾರಿಸಿದ ಹಳೇ ಮಂಚವನ್ನು ಹಾಕಿ ಕೊಟ್ಟನು. ಅದನ್ನು ಮೂರು ರೂಪಾಯಿಗಳಿಗೆ ಹಿಂದೆ ಖರೀದಿ ಮಾಡಿದ್ದನು. ಅದರ ಮೇಲೆ ಗೋಣಿತಟ್ಟುಗಳನ್ನು ಹಾಕಿದನು. ಸೊಳ್ಳೆಗಳ ಉಪದ್ರವನ್ನು ಪರಿಹರಿಸುವುದಕ್ಕೆ, ಅವನ ಹೆಂಡತಿಯು ತನ್ನ ನುಣುಪಾದ ಹಳೆ ಸೀರೆಯನ್ನು ನೆಟ್ಟಗೆ ಮಂಚಕ್ಕೆ ಸಿಕ್ಕಿಸಿದ ನಾಲ್ಕು ಬಿದಿರ ಕಂಬಗಳ ಮೇಲೆ ಹಾಕಿಕೊಟ್ಟಳು. ಬರಗಾಲ ಪೀಡಿತ ವೈಶ್ಯನಿಗೆ ಮೊದಲಿನ ರಾತ್ರಿ ನಿದ್ರೆಯಿರಲಿಲ್ಲ. ಇಲ್ಲಿ ಮಂಚದ ಮೇಲೆ ಮಲಗಿದೊಡನೆ ಪ್ರಗಾಢನಿದ್ರೆಯು ಬಂತು. ಇಡೀ ರಾತ್ರಿ ಬಹು ಸುಖದಿಂದ ಮಲಗಿದನು. ಆಯಾಸವು ಮಾಯವಾಯಿತು.

ನಾಲ್ಕು ದಿನಗಳ ನಂತರ, ಒಂದು ದಿನ ರಸ್ತೆಯಲ್ಲಿ ಧನಿಕಮಿತ್ರನು ದುಷ್ಕಾಲಪೀಡಿತ ವೈಶ್ಯನನ್ನು ಭೇಟಿಯಾದನು. ಧನಿಕನು ಸಭ್ಯತೆಯಿಂದ ಹೀಗೆ ಹೇಳಿದನು: "ಕೆಲಸದ ವ್ಯವಸ್ಥೆ ಎಲ್ಲಿಯಾಯಿತು? ಎಲ್ಲಿ ನಿಲ್ಲುತ್ತಿ? ಊಟ-ಉಪಚಾರ ಮಾಡಲು ಸಾಕಷ್ಟು ಸಿಗುತ್ತದೆಯೇ?" ಅದಕ್ಕೆ ಬಡ ವೈಶ್ಯನು ಹೀಗಂದನು: "ಬಹು ಉತ್ತಮ ವ್ಯವಸ್ಥೆಯಾಗಿದೆ. ನಾನು ನನ್ನೂರಿನ ಒಬ್ಬ ಅಂಗಡಿಗಾರ ಬಂಧುವಿನ ಮನೆಯಲ್ಲಿದ್ದೇನೆ. ಪತಿ-ಪತ್ನಿಯರಿಬ್ಬರು ಬಹು ಸಜ್ಜನರು. ಅಂಗಡಿಯಲ್ಲಿ ನನ್ನನ್ನು ಪಾಲುಗಾರನನ್ನಾಗಿ ಮಾಡಿದ್ದಾನೆ. ನಾನು ಊಟಕ್ಕೆ ಅವನಲ್ಲೆ ನಿಲ್ಲಬೇಕೆಂದೂ ಪ್ರತಿ ತಿಂಗಳಲ್ಲಿ ಕಡಿಮೆಯೆಂದರೆ ಐವತ್ತು ರೂಪಾಯಿಯಾದರೂ ಮನೆಗೆ ಕಳುಹಿಸಬಹುದೆಂದೂ ಆಶ್ವಾಸನೆಯಿತ್ತಿದ್ದಾನೆ. ಭೋಜನದ ವ್ಯವಸ್ಥೆಯು ಅತ್ಯ

ತ್ರಮವಾಗಿದೆ. ಅವನ ಬಹು ಪ್ರೇಮಮಯ ಸಮತೆಯ ವ್ಯವಹಾರವನ್ನು ನಾನು ಜೀವನದಲ್ಲಿ ಎಂದಿಗೂ ಮರೆಯಲಾರೆನು."

ಅವನ ಈ ಮಾತುಗಳನ್ನು ಕೇಳಿ, ಧನಿಕ ಮಿತ್ರನ ಗರ್ವಕ್ಕೆ ಪೆಟ್ಟು ತಗಲಿತು. ಧನಿಕನು ತನ್ನ ವರ್ತನೆಯನ್ನು ಪೂರ್ಣ ಅರಿತಿದ್ದನು. ಒಂದು ವಿಷಯವು ಅವನಿಗೆ ಸೂಚಿತವಾಯಿತು. ತಮ್ಮಲ್ಲಿ ಉತ್ತಮ ಭೋಜನವು ಸದಾ ಸಿದ್ಧವೆಂಬುದರ ಗರ್ವವು ಅವನಲ್ಲಿ ತುಂಬಿತ್ತು. ಅದಲ್ಲದೆ, ಅಲಂಕರಿಸಿ, ಸಜ್ಜುಗೊಳಿಸಿದ ಮನೆಯಿದೆ; ಹಾಸಿಗೆ ತಲೆದಿಂಬುಗಳಿವೆ; ಗಾಜಿನ ಕವಲೊಡೆದ ದೀಪಸ್ತಂಭಗಳಿವೆ ಎಂಬುದರ ಗರ್ವವು ಅವನಲ್ಲಿ ಕಾಣಿಸುತ್ತಿತ್ತು. ಆ ಅಂಗಡಿಯವನಲ್ಲಿ ಇಂಥ ವಸ್ತುಗಳು ಎಲ್ಲಿವೆ? ಧನಿಕನು ತನ್ನ ವಿಷಯಗಳನ್ನು ಗೌರವಿಸುವುದಕ್ಕೋಸ್ಕರ ಹಾಗು ಆ ಬಡ ಅಂಗಡಿಗಾರನನ್ನು ನಿಂದಿಸುವುದಕ್ಕೋಸ್ಕರ, ಹೀಗಂದನು: "ಅಲ್ಲಿ ನಿನಗೆ ಏನು ಭೋಜನ ಸಿಕ್ಕಿರಬಹುದು? ದೊಡ್ಡ ಅಕ್ಕಿ, ಶುಷ್ಕ ರೊಟ್ಟಿ, ಸೊಪ್ಪಿನ ಪದಾರ್ಥ ಮತ್ತು ಮಲಗುವುದಕ್ಕೆ ಬರೇ ನೆಲ ಅಥವಾ ಹಳೇ ಮಂಚ ಸಿಕ್ಕಿರಬಹುದು. ಆ ಬಡವನಲ್ಲಿ ಮತ್ತೇನಿರಬಹುದು? ನನ್ನಲ್ಲಿನ ಉತ್ತಮ ಭೋಜನ ಮತ್ತು ಸಜ್ಜುಗೊಳಿಸಿದ ಬಂಗಲೆಯನ್ನು ಬಿಟುಬಿಟ್ಟು ನೀನು ಅಲ್ಲಿಗೆ ಹೋದಿ; ಈಗ ಮನಸ್ಸಿನಲ್ಲಿ ನೀನು ಪಶ್ಚಾತ್ತಾಪ ಪಡುತ್ತಿರಬಹುದು."

ವೈಶ್ಯನು ಹಸನ್ಮುಖನಾಗಿ ಹೇಳಿದನು:—"ಬಂಧುವೇ! ನೀನು ನಿನ್ನ ಮನೆಯಲ್ಲಿ ಬಹು ಧನಿಕನಾಗಿರುತ್ತಿ; ನಿನ್ನಲ್ಲಿ ಹಾಸಿಗೆ—ತಲೆದಿಂಬುಗಳಿವೆ; ವಿದ್ಯುತ್‌ದೀಪಗಳಿವೆ; ಅಲಂಕರಿಸಿದ ಮನೆಯು ನಿನ್ನದು; ಉತ್ತಮ ಭೋಜನವೂ ದಿನಾಲೂ ಸಿದ್ಧವಾಗುತ್ತದೆ. ಆದರೆ, ನನಗೆ ಅದರಿಂದ ಪ್ರಯೋಜನವೇನು? ನಿನ್ನಲ್ಲಿ ಊಟಮಾಡಿದ ಸುಖವು ನನಗೆ ಲಭಿಸಲಿಲ್ಲ; ನಿದ್ರಿಸಿದ ಸುಖವು ಸಹ ನನಗೆ ಸಿಕ್ಕಲಿಲ್ಲ. ಇಡೀ ರಾತ್ರೆಯನ್ನು ತಗಣೆ, ಸೊಳ್ಳೆಗಳೊಡನೆ ಜಗಳವಾಡುತ್ತಾ ಕಳೆದೆನು; ನಿದ್ದೆಯು ಬರಲೇ ಇಲ್ಲ. ನನಗೆ ಹಗ್ಗದ ಮಂಚವೇ ಉತ್ತಮವೆಂದು ತೋರುತ್ತದೆ. ಗೋಣಿ ತಟ್ಟಿನ ಹಾಸಿಗೆ, ಹಳೇ ಛಾದರು ನನ್ನನ್ನು ಸೊಳ್ಳೆಗಳ ಕಾಟದಿಂದ ಸಂರಕ್ಷಿಸುತ್ತವೆ. ಇವೇ ಪರಮಸುಖಪ್ರದವಾಗಿವೆ: ರಾತ್ರಿಯಲ್ಲಿ ಬಹು ಸುಖದಿಂದ ನಿದ್ರಿಸುತ್ತೇನೆ; ಭೋಜನದ ವಿಷಯ ಏನನ್ನು ಹೇಳಲಿ? ದೊಡ್ಡ ಅಕ್ಕಿ, ಒಣ ರೊಟ್ಟಿ ಮತ್ತು ಸೊಪ್ಪುಗಳ ಪದಾರ್ಥಗಳಿಂದ ಸಿಗುವ ಸುಖವು ಎಲ್ಲಿಯೂ

ಲಭಿಸಲಾರದು. ನಿನ್ನಲ್ಲಿನ ಭೋಜನವು ವಿಷದಂತಿತ್ತು; ಅಂಗಡಿಗಾರ ನದು ಸಾಕ್ಷಾತ್ ಅಮೃತಸದೃಶವಾಗಿದೆ. ನಿಮ್ಮಿರ್ವರ ಮನಸ್ಸಿನಲ್ಲಿ ಒಂದು ಹೊರೆಯೇ ಉಂಟಾಯಿತು; ನನ್ನ ಆ ಗಮನವು ಒಂದು ವಿಪತ್ತಿ ಯೆಂದು ನೀನು ಮತ್ತು ನಿನ್ನ ಸ್ತ್ರೀಯು ಭಾವಿಸಿದಿರಿ; ಮನಸ್ಸಿನಲ್ಲಿ ವಿಷ ಮತೆಯು ತುಂಬಿತ್ತು. ವಿಷಮತೆಯೇ ವಿಷವೆಂದೂ, ಸಮತೆಯೇ ಅಮೃತವೆಂದೂ, ಮಹಾತ್ಮರು ಅನ್ನುತ್ತಾರೆ. ನಿನ್ನ ಮೃಷ್ಟಾನ್ನದಲ್ಲಿಯೂ ವಿಷಮತೆಯ ಕಾರಣ, ವಿಷವು ಬರುತ್ತಿತ್ತು; ಮತ್ತು ಅಂಗಡಿಗಾರನ ಒಣ ರೊಟ್ಟಿಯ ಭೋಜನದಲ್ಲಿ ಸಮತೆಯಿರುವುದರಿಂದ ಅದು ಅಮೃತತುಲ್ಯವಾ ಗಿತ್ತು. ಇದು ಮಾತ್ರವಲ್ಲ, ಅವನ ವರ್ತನೆಯು ಸಹ ಅಮೃತಸಮಾನ ವಾಗಿದೆ. ನಿನ್ನಲ್ಲಿ ಲಕ್ಷಗಟ್ಲೆ ರೂಪಾಯಿಯಿದೆ ಮತ್ತು ಲಕ್ಷಗಟ್ಲೆ ಉತ್ಪನ್ನ ವಿದೆ; ಹಾಗೂ ನೀನು ನನ್ನ ಬಾಲ್ಯದ ಜಾತಿಮಿತ್ರನೂ ಆಗಿರುತ್ತೀ; ಆದರೆ, ನನ್ನ ಕ್ಷುಧೆಯಿಂದ ಗಾಬರಿಗೊಂಡು ನನ್ನ ಮಕ್ಕಳಿಗೋಸ್ಕರ ಏನನ್ನೂ ಕಳುಹಿಸಲು ಸಹಾಯ ಮಾಡಲಿಲ್ಲ. ನನಗೆ ಐವತ್ತು–ಅರುವತ್ತು ರೂಪಾಯಿ ವೇತನದ ಕೆಲಸವನ್ನೂ ಕೊಡಲಿಲ್ಲ. ಕೇವಲ ನನ್ನೂರಿನ ಸಂಬಂಧದ ಕಾರಣ, ಸಾಧಾರಣ ಪರಿಚಯ ಮಾತ್ರವಿದ್ದ ಆ ಬಡ ಅಂಗಡಿಗಾರನು, ನಿರ್ಧನನಾದರೂ ನನಗೆ ಆಶ್ರಯವಿತ್ತನು. ಐವತ್ತು ರೂಪಾಯಿ ಮನೆಗೆ ಕಳುಹಿಸುವಂತೆ ಮಾಡಿದನು, ತನ್ನ ಅಂಗಡಿಯಲ್ಲಿ ನನ್ನನ್ನು ಪಾಲುಗಾರ ನಾಗಿ ಮಾಡಿದನು. ನಾನು ಹೇಗೆ ಅವನ ಉಪಕಾರವನ್ನು ಮರೆ ಯಲಿ! ಇದನ್ನು ಹೇಳು. ಇದನ್ನೆಲ್ಲ ಅವನು ಮಾಡಿದುದು ಉಪ ಕಾರದ ಭಾವನೆಯಿಂದಲ್ಲ; ವಿಶುದ್ಧ ಪ್ರೇಮದ ಮತ್ತು ಕರ್ತವ್ಯದ ಭಾವನೆಯಿಂದ. ಅವನು ನನಗೆ ಉಪಕಾರ ಮಾಡುವುದಿಲ್ಲ; ಮಾತ್ರವಲ್ಲ, ಸುಖವನ್ನು ಹೊಂದಿಸಿ, ನನಗೆ ಅವನು ಕೃತಜ್ಞನಾಗುತ್ತಾನೆ; ಮತ್ತು ಇದರಲ್ಲಿ ತಾನು ಧನ್ಯನೆಂದು ಭಾವಿಸಿ ಸುಖಿಯಾಗುತ್ತಾನೆ; ಅವನ ಧರ್ಮ ಪತ್ನಿಯು ಸಹ ಇದೇ ಭಾವನಾತತ್ಪರಳಾಗಿದ್ದಾಳೆ. ಅವರೀರ್ವರ ಮುಖ ಗಳಲ್ಲಿ ಇದಕ್ಕೋಸ್ಕರ ಪ್ರಫುಲ್ಲತೆ ಹಾಗೂ ಉಲ್ಲಾಸವು ನರ್ತಿಸಿರುತ್ತದೆ."

ಧನಿಕನು ಹೀಗೆ ಕೇಳಿದನು: "ನನ್ನಲ್ಲಿ ನಿನಗೆ ಯಾವ ವಿಷಯದಲ್ಲಿ ವಿಷಮತೆಯು ಕಂಡುಬಂತು? ಮತ್ತು ಅವನಲ್ಲಿ ಸಮತೆಯು ಹೇಗೆ ಕಾಣಿ ಸುತ್ತದೆ?"

ಆಗ ವೈಶ್ಯನು ಹೀಗೆಂದನು:—"ನನಗೆ ನಿನ್ನಲ್ಲಿ ಬಹು ಉತ್ತಮ ಭೋಜನ ಪದಾರ್ಥಗಳಿದ್ದುವು; ಇದರಲ್ಲಿ ಸಂದೇಹವಿಲ್ಲ; ಆದರೆ, ನನಗೆ ಅವು ವಿಷಸಮಾನವೆಂದು ತೋರಿದವು. ನನ್ನನ್ನು ಅತಿಥಿಯೆಂದು ಹೇಳಿ, ಮುಂಚಿತವಾಗಿ ಭೋಜನಮಾಡಿಸಿದಿ. ನಿನಗೆ ಬದಾಮು ಹಲ್ವ, ಮಲಾಯಿ, ಕೆಬೇಜು ಮತ್ತು ತರತರದ ಉಪ್ಪಿನಕಾಯಿ ಚಟ್ನಿಗಳು ಬಡಿಸಲ್ಪಟ್ಟಿದ್ದುವು; ವಿಷಮತೆಯನ್ನು ಕಂಡು ನನಗೆ ದುಃಖವಾಯಿತು. ಭೇದವನ್ನು ಕಲ್ಪಿಸದೆ ನಿನ್ನೊಡನೆ ನನಗೆ ಭೋಜನ ಮಾಡಿಸಿದರೆ ಏನಾಗುತಿತ್ತು? ಸ್ವಲ್ಪ ಅಧಿಕ ಖರ್ಚಾಗಬಹುದಿತ್ತು. ನೀನು ಸಹ ಪತ್ನಿಯ ಪ್ರಸ್ತಾವವನ್ನೆ ಗೌರವಿಸಿದಿ. ಜಾತಿ ಮಿತ್ರನೊಡನೆ ಇಂಥ ವರ್ತನೆಯು ಕಲಂಕವಲ್ಲವೆ? ಈ ವಿಷಮತೆ ಯಿಂದಲೇ ನಿನ್ನಲ್ಲಿಯ ಭೋಜನವು ವಿಷದಂತಿತ್ತು. ಅಂಗಡಿಗಾರನ ವರ್ತನೆಯನ್ನು ನೋಡು. ಅವನು ಬಡವನು; ಆದರೆ, ಅವನ ಪತ್ನಿಯು ದೊಡ್ಡ ಅಕ್ಕಿ, ಒಣ ರೊಟ್ಟಿ, ಎಲೆಗಳ ಪದಾರ್ಥ ಹಾಗು ಮಜ್ಜಿಗೆ—ಮನೆ ಯಲ್ಲಿದ್ದ ಸರ್ವವನ್ನೂ ನಮ್ಮಿಬ್ಬರಿಗೆ ಹತ್ತಿರ ಕೂಡ್ರಿಸಿ ಸಮಾನಭಾವ ದಿಂದ, ಬಹು ಪ್ರೇಮ—ಆದರ ಮತ್ತು ಉಲ್ಲಾಸದೊಡನೆ ಬಡಿಸುತ್ತಾಳೆ. ಸೊಳ್ಳೆಗಳ ಕಾಟವನ್ನು ಪರಿಹರಿಸುವುದಕ್ಕೆ ತನ್ನ ಹಳೇ ಛಾದರವನ್ನು ಇಡುತ್ತಾಳೆ. ಅವಳ ಈ ನಿಷ್ಕಾಮ ಪ್ರೇಮ-ಸಮತೆಗಳ ವ್ಯವಹಾರದಿಂದ ನನ್ನ ಮೇಲೆ ಬಹು ಪ್ರಭಾವವು ಬಿದ್ದಿರುತ್ತದೆ. ಆದರಿಂದಲೇ ಅಲ್ಲಿ ನನಗೆ ಅಮೃತವೇ ಲಭಿಸುತ್ತದೆ. ಮತ್ತು ವ್ಯವಹಾರವನ್ನು ಸ್ಮರಿಸಿ, ನಾನು ಆಗಾಗ್ಗೆ ಪ್ರಫುಲ್ಲಿತನಾಗಿ ಹರ್ಷದಿಂದ ಗದ್ಗದಕಂಠನಾಗುತ್ತೇನೆ."

ಧನಿಕನು ಮರುಮಾತನಾಡದೆ ಲಜ್ಜಿತನಾದನು; ಮತ್ತು ವ್ಯವಹಾರ ವಿಷಮತೆ ಹಾಗು ಪ್ರೇಮ—ದೀನತೆಗಳಿಗೋಸ್ಕರ, ಮನಸ್ಸಿನಲ್ಲಿಯೇ ಪಶ್ಚಾ ತ್ತಾಪಪಟ್ಟು ತಲೆಯನ್ನು ಬಾಗಿಸಿ ಅಲ್ಲಿಂದ ಹೊರಟು ಹೋದನು.

ಇದೊಂದು ಕಲ್ಪಿತ ದೃಷ್ಟಾಂತವಾಗಿದೆ. ಸಕಲರೊಡನೆ ಪ್ರೇಮ— ವಿನಯಗಳಿಂದೊಡಗೂಡಿದ ತ್ಯಾಗ ಮತ್ತು ಉದಾರತೆಗಳ ವರ್ತನೆಯು ಇರಬೇಕಾಗಿದೆ. ಸಕಲರನ್ನು ಯಥಾ ಯೋಗ್ಯ, ಶಾಸ್ತ್ರಾನುಕೂಲ ಆದರ-ಸತ್ಕಾರಪೂರ್ವಕ, ವಿನಯ-ಪ್ರೇಮಪೂರ್ವಕ, ಭೇದಭಾವವಿಲ್ಲದೇ ತನ್ನ ಭೋಜನವನ್ನೇ ಅನ್ಯರಿಗೂ ಮಾಡಿಸಬೇಕು; ಮನಸ್ಸಿನಲ್ಲಿ ವೈಷಮ್ಯ ವಿರಬಾರದು.

■■■■■■■■

Edited, Printed and Published by K. V. Shenoy
at The Prabhat Printers, Ltd., Mangalore-1.